

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1008 (1112)
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 21.09.2021
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ದೇವರಾಜ ಮಾರುಕಟ್ಟೆ ಮತ್ತು ಲ್ಯಾಂಡ್ಸ್ ಡೌನ್ ಬಿಲ್ಡಿಂಗ್ ಗಳನ್ನು ಪಾರಂಪರಿಕ ಕಟ್ಟಡಗಳೆಂದು ಗುರುತಿಸಲಾಗಿದೆಯೇ ? | ಹೌದು.<br>ಮೈಸೂರು-ನಂಜನಗೂಡು ಮಹಾಯೋಜನೆ II - 2031 ರಲ್ಲಿ ಪಟ್ಟಿ ಮಾಡಿರುವ ಪ್ರಕಾರ ದೇವರಾಜ ಮಾರುಕಟ್ಟೆ ಹಾಗೂ ಲ್ಯಾನ್ಸ್‌ಡೌನ್ ಕಟ್ಟಡಗಳನ್ನು ಪಾರಂಪರಿಕ ಕಟ್ಟಡಗಳೆಂದು ಘೋಷಿಸಲಾಗಿದೆ. |
| ಆ) | ಈ ಎರಡು ಕಟ್ಟಡಗಳನ್ನು ಈಗಿರುವ ರೀತಿಯಲ್ಲಿಯೇ ನವೀಕರಿಸಿ, ಭದ್ರಪಡಿಸಲಾಗುವುದೇ; ಅಥವಾ ದೇವರಾಜ ಮಾರುಕಟ್ಟೆಯನ್ನು ಪೂರ್ಣವಾಗಿ ಡೆಮಾಲಿಷ್ ಮಾಡಿ ಹೊಸದಾಗಿಯೇ ನಿರ್ಮಿಸಲಾಗುವುದೇ; ಈ ವಿಷಯಗಳಲ್ಲಿ ಸರ್ಕಾರ ಯಾವ ತೀರ್ಮಾನ ತೆಗೆದುಕೊಂಡಿದೆ; | ಮೈಸೂರು ಮಹಾನಗರ ಪಾಲಿಕೆಯ ಪಾರಂಪರಿಕ ಕಟ್ಟಡಗಳು ಮತ್ತು ವೃತ್ತಗಳ ಅಭಿವೃದ್ಧಿಗಾಗಿ ಮಾನ್ಯ ಮುಖ್ಯಮಂತ್ರಿಗಳು 2014-15ನೇ ಸಾಲಿನಲ್ಲಿ ಮಂಜೂರು ಮಾಡಿರುವ ರೂ. 100 ಕೋಟಿಗಳ ವಿಶೇಷ ಅನುದಾನದಲ್ಲಿ ಲ್ಯಾನ್ಸ್‌ಡೌನ್ ಬಿಲ್ಡಿಂಗ್ ಹಾಗೂ ದೇವರಾಜ ಮಾರುಕಟ್ಟೆ ಕಟ್ಟಡಗಳನ್ನು ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿರುತ್ತದೆ. ಆದರೆ ದಿನಾಂಕ: 28-08-2016 ರಂದು ದೇವರಾಜ ಮಾರುಕಟ್ಟೆಯ ಉತ್ತರ ಭಾಗವು ಕುಸಿದುಬಿದ್ದ ಕಾರಣ ಅಂದಿನ ಮಾನ್ಯ ಮುಖ್ಯಮಂತ್ರಿಗಳು ದಿನಾಂಕ: 30-08-2016 ರಂದು ಸ್ಥಳ ಪರಿಶೀಲನೆ ನಡೆಸಿ, ಟಾಸ್ಕ್ ಫೋರ್ಸ್ ಕಮಿಟಿಯ ವರದಿ ಪಡೆದು, ವರದಿ ಬಂದ ನಂತರ ಕಾಮಗಾರಿಗಳನ್ನು ಕೈಗೊಳ್ಳಲು ಸೂಚಿಸಿರುವ ಕಾರಣ ಕಾಮಗಾರಿಗಳನ್ನು ಸ್ಥಗಿತಗೊಳಿಸಲಾಗಿರುತ್ತದೆ.<br>ಮುಂದುವರೆದು, ದೇವರಾಜ ಮಾರುಕಟ್ಟೆಯ ಹಾಲಿ ಕಟ್ಟಡವನ್ನು ತೆರವುಗೊಳಿಸಿ, ಹಾಲಿ ಇರುವ ಕಟ್ಟಡದ ಎತ್ತರಕ್ಕೆ ಸೀಮಿತವಾಗಿ ಪ್ರಸ್ತುತ ಪಾರಂಪರಿಕ ಶೈಲಿಯ ವಿನ್ಯಾಸದಂತೆ ಹಾಗೂ ಮಾದರಿಯಲ್ಲಿ ಹೊಸದಾಗಿ ಪುನರ್‌ನಿರ್ಮಾಣ ಮಾಡಲು ಮೈಸೂರು ನಗರದ ವಿಶೇಷ ಪಾರಂಪರಿಕ ಸಮಿತಿ ಹಾಗೂ ಕೌನ್ಸಿಲ್ ಸಭೆಯು ತೀರ್ಮಾನಿಸಿರುವುದರಿಂದ ಅದರಂತೆ ಪ್ರಸ್ತಾವನೆ ಸ್ವೀಕೃತವಾಗಿದ್ದು, ಪರಿಶೀಲನೆ ಹಂತದಲ್ಲಿರುತ್ತದೆ. |

| | | |
|---|---|---|
| | | ಏತನ್ಮಧ್ಯೆ, ದಿನಾಂಕ 10.12.2019 ರಂದು ನಡೆದ ಮೈಸೂರು ನಗರದ ವಿಶೇಷ ಪಾರಂಪರಿಕ ಸಮಿತಿ ಸಭೆಯ ತೀರ್ಮಾನದ ಹಾಗೂ ದಿನಾಂಕ 30.01.2020 ರಂದು ನಡೆದ ಮೈಸೂರು ಮಹಾನಗರ ಪಾಲಿಕೆಯ ಸಾಮಾನ್ಯ ಕೌನ್ಸಿಲ್ ಸಭೆಯ ತೀರ್ಮಾನದ ವಿರುದ್ಧ ಶ್ರೀ ಶ್ರೀಜಯ್ ದೇವರಾಜ ಅರಸು ಮತ್ತಿತರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ದಿನಾಂಕ 02.07.2021 ರ ವಿಚಾರಣೆಯಲ್ಲಿ ಮಾನ್ಯ ನ್ಯಾಯಾಲಯವು ನೀಡಿರುವ ಸೂಚನೆಯನ್ವಯ ಸದರಿ ಪ್ರಸ್ತಾವನೆಯನ್ನು ಮತ್ತೊಮ್ಮೆ ವಿಶೇಷ ಪಾರಂಪರಿಕ ಸಮಿತಿ ಮಂಡಿಸಿ, ಮರುಪರಿಶೀಲಿಸಿ ವರದಿ ಸಲ್ಲಿಸುವಂತೆ ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ ಇವರಿಗೆ ದಿನಾಂಕ 04.08.2021ರ ಸರ್ಕಾರದ ಪತ್ರದಲ್ಲಿ ಸೂಚಿಸಲಾಗಿದೆ.<br>ಲ್ಯಾನ್ಸ್‌ಡೌನ್ ಕಟ್ಟಡವನ್ನು ನವೀಕರಣ ಗೊಳಿಸಬೇಕೆ ಅಥವಾ ಪುನರ್‌ನಿರ್ಮಾಣ ಮಾಡಬೇಕೆ ಎಂಬ ಬಗ್ಗೆ ಸೂಕ್ತ ನಿರ್ಣಯಕ್ಕಾಗಿ ವಿಶೇಷ ಪಾರಂಪರಿಕ ಸಮಿತಿಯ ಮುಂದೆ ಮಂಡಿಸುವ ಹಂತದಲ್ಲಿದೆ. |
| ಇ) | ಲ್ಯಾಂಡ್ಸ್ ಡೌನ್ ಕಟ್ಟಡದ ಮುಂದಿನ ತಾತಯ್ಯ ಪಾರ್ಕನ್ನು ಆಧುನೀಕರಣಗೊಳಿಸಲು ಕ್ರಮ ತೆಗೆದುಕೊಳ್ಳಲಾಗುವುದೇ ? | ಪ್ರಸ್ತುತ ಕೋವಿಡ್ ಕಾರಣದಿಂದಾಗಿ ಪಾಲಿಕೆಗೆ ಬರಬೇಕಾದ ಆದಾಯವು ಕಡಿಮೆಯಾಗಿರುವುದರಿಂದ ಮುಂದಿನ ದಿನಗಳಲ್ಲಿ ಅನುದಾನದ ಲಭ್ಯತೆಯ ಮೇರೆಗೆ ತಾತಯ್ಯ ಪಾರ್ಕನ್ನು ಆಧುನೀಕರಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ನಅಇ 94 ಎಸಿಎಂ 2021 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು